KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಫೆಬ್ರವರಿ ೧೭, ೨೦೧೧ (ಮಾಘ ೨೮, ಶಕ ವರ್ಷ ೧೯೩೨) | ಸಂಚಿಕೆ ೭ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಖಜಾನೆ ನಿರ್ದೇಶನಾಲಯ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ಖನಿ/ಸಿಬ್ಬಂದಿ (5)/ಸಿಆರ್ 11/2010–11, ಬೆಂಗಳೂರು, ದಿನಾಂಕ:6ನೇ ಜನವರಿ, 2011**

ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ಖಜಾನೆ ಇಲಾಖೆಯ ಗ್ರೂಪ್ ಬಿ ವೃಂದದ ಸಹಾಯಕ ಖಜಾನಾಧಿಕಾರಿ ಹುದ್ದೆಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ, ಆಯ್ಕೆ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ: ಇ(1)12052/2009–10/ಪಿ.ಎಸ್.ಸಿ., ಬೆಂಗಳೂರು, ದಿನಾಂಕ:11.03.2010ರ ರಾಜ್ಯಪತ್ರದಲ್ಲಿ ಪ್ರಕಟಿಸಿದೆ. ಇದೇ ಸಮ ಸಂಖ್ಯೆಯ ಅಧಿಸೂಚನೆ ದಿನಾಂಕ:21.08.2010ರಲ್ಲಿ 20 ಸಹಾಯಕ ಖಜಾನಾಧಿಕಾರಿಗಳ ನೇಮಕಾತಿ ಆದೇಶ ಹೊರಡಿಸುವ ಸಂದರ್ಭದಲ್ಲಿ ಕೆಲವೊಂದು ಅಭ್ಯರ್ಥಿಗಳ ಆರಕ್ಷಕ ವರದಿ ಮತ್ತು ಸಿಂಧುತ್ವ ಪ್ರಮಾಣ ಪತ್ರಗಳು ಬಾರದೇ ಇದ್ದ ಕಾರಣ ಅಂತಹವರ ಹೆಸರುಗಳನ್ನು ಹೊರತುಪಡಿಸಿ ಉಳಿದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ಹೊರಡಿಸಲಾಗಿತ್ತು. ಪ್ರಸ್ತುತ ಈ ಕೆಳಕಂಡ ಅಭ್ಯರ್ಥಿಗೆ ಸಂಬಂಧಿಸಿದಂತೆ, ಆರಕ್ಷಕ ವರದಿ, ಸ್ವೀಕರಿಸಿದ್ದು ಇದರಲ್ಲಿ ಯಾವುದೇ ವ್ಯತಿರಿಕ್ತ ವರದಿ ಇರುವುದಿಲ್ಲ. ಸಿಂಧುತ್ವ ಪ್ರಮಾಣ ಪತ್ರವನ್ನು ಉಚ್ಛ ನ್ಯಾಯಾಲಯ ರಿಟ್ ಪಿಟಿಷನ್ ಸಂ.33903/2010ರ ತೀರ್ಪಿನ ಆಧಾರದ ಮೇಲೆ ಪರಿಗಣಿಸಲಾಗಿದ್ದು, ಇವರನ್ನು ಖಜಾನೆ ಇಲಾಖೆಯಲ್ಲಿ ರೂ.11400–300–12300–350–14400–400–16800–450–19500–525–21600ರ ವೇತನ ಶ್ರೇಣಿಯ ಸಹಾಯಕ ಖಜಾನಾಧಿಕಾರಿ ಹುದ್ದೆಗೆ ಪರಿವೀಕ್ಷಣೆ ಮೇಲೆ (On Probation) ಈ ಮೂಲಕ ನೇಮಕ ಮಾಡಲಾಗಿದೆ.

| ಕ್ರ. ಸಂ. | ಲೋಕಸೇವಾ ಆಯೋಗದ ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ | ಅಭ್ಯರ್ಥಿಯ ಹೆಸರು, ವಿಳಾಸ, ಶ್ರೀ/ಶ್ರೀಮತಿ |
|---|---|---|
| 1. | 23 | ರವಿ ಬೆಳ್ಳೇಮನೆ, C/o ಮಾದಸ್ವಾಮಿ, ನಂ.622/ಎ, 9ನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು–560021. |

ಈ ನೇಮಕಾತಿಯು ಅಭ್ಯರ್ಥಿಗಳ ಆಯ್ಕೆ ಪಟ್ಟಿಗೆ ಸಂಬಂಧಿಸಿದಂತೆ ಉಚ್ಛ ನ್ಯಾಯಾಲಯದಲ್ಲಿನ ರಿಟ್ ಅರ್ಜಿ ಸಂಖ್ಯೆ:1072/2010 ಮತ್ತು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿನ ಅರ್ಜಿ ಸಂಖ್ಯೆ:919/2009, 1196/2009, 1197/2009, 1676/2009, 2049/2009 ಮತ್ತು 2118/2009ರ ನ್ಯಾಯಾಲಯಗಳು ನೀಡಬಹುದಾದ ತೀರ್ಪಿನ ಷರತ್ತುಗಳಿಗೆ ಒಳಪಟ್ಟಿರುತ್ತದೆ.

ಶ್ರೀ ರವಿ ಬೆಳ್ಳೇಮನೆ ಯವರು ಕರ್ನಾಟಕ ಉಚ್ಛ ನ್ಯಾಯಾಲಯಕ್ಕೆ ಸಲ್ಲಿಸಿರುವ ರಿಟ್ ಪಿಟಿಷನ್ ಸಂ.33903/2010ರ ತೀರ್ಪಿನ ಆಧಾರದ ಮೇಲೆ ಈ ಆದೇಶವನ್ನು ಹೊರಡಿಸಲಾಗಿದೆ. ಈ ಅಭ್ಯರ್ಥಿಯು 2 ವರ್ಷಗಳ ಅವಧಿಯಲ್ಲಿ ಪರೀಕ್ಷಾರ್ಥ ತರಬೇತಿಯಲ್ಲಿರುತ್ತಾರೆ. ಈ ಅವಧಿಯಲ್ಲಿ 1974ರ ಕರ್ನಾಟಕ ಸಿವಿಲ್ ಸೇವೆಗಳು (ಸೇವಾ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಪರೀಕ್ಷೆ ಹಾಗೂ ಈ ಹುದ್ದೆಗೆ ನಿಗದಿಪಡಿಸಿರುವ ಎಲ್ಲಾ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು ಮತ್ತು ಪರೀಕ್ಷಾರ್ಥ ಅವಧಿಯನ್ನು ತೃಪ್ತಿಕರವಾಗಿ ಪೂರೈಸಬೇಕು.

ಈ ಅಭ್ಯರ್ಥಿಯ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ ಆದೇಶದ ಅಧೀನಕ್ಕೆ ಒಳಪಟ್ಟಿರುತ್ತವೆ.

ಈ ಅಭ್ಯರ್ಥಿಯ ಜೇಷ್ಠತೆಯು ಕರ್ನಾಟಕ ಲೋಕಸೇವಾ ಆಯೋಗವು ಆಯ್ಕೆ ಪಟ್ಟಿಯಲ್ಲಿ ನಮೂದಿಸಿರುವ ಜೇಷ್ಠತೆಯಂತೆಯೇ ಇರುತ್ತದೆ.

ಈ ಅಭ್ಯರ್ಥಿಯು ಈ ಅಧಿಸೂಚನೆಯನ್ನು ನೋಂದಾಯಿತ ಅಂಚೆ ಮೂಲಕ ರವಾನಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ನಿರ್ದೇಶಕರು, ಖಜಾನೆ ಇಲಾಖೆ, ವಿ.ವಿ.ಗೋಪುರ, ಬೆಂಗಳೂರು–560001, ಇವರಲ್ಲಿ ಕರ್ತವ್ಯದ ಮೇಲೆ ಹಾಜರಾಗತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಭ್ಯರ್ಥಿಯ ನೇಮಕಾತಿಯು ರದ್ದಾಗುವುದು.

ಪಿ.ಆರ್.45

ಖಜಾನೆ ನಿರ್ದೇಶಕರು,
ಬೆಂಗಳೂರು.

**HEALTH AND FAMILY WELFARE DEPARTMENT**

**FORM-1**

**(See Rule 9)**

**NOTIFICATION**

**No.HFW 603 HSH 2010, Bangalore, Dated:8th December, 2010**

**Dr. CHANDRAKANT** working as Specialist in the Department of Health and Family Welfare Services Office of the District Hospital, Bidar, Bidar District is permitted to change his name to **Dr. CHANDRAKANT MEDA.**

**CHIKKEGOWDA**
Under Secretary to Government,
Health & Family Welfare Department (Services-1).

PD-9

## ಕೋಲಾರ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿ

**ಅಧಿಸೂಚನೆ ಸಂಖ್ಯೆ : ಎಡಿಎಂ 01/2011 ದಿನಾಂಕಃ 31/01/2011**

**ವಿಷಯ :** ಶೀಘ್ರಲಿಪಿಗಾರ ಹುದ್ದೆಗಳ ನೇಮಕಾತಿ ಬಗ್ಗೆ.

**ಉಲ್ಲೇಖ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ ಎಲ್ಎಡಬ್ಲ್ಯೂ 144/ಎಲ್ಎಸಿ–2009, ದಿಃ 6–8–2009.

2. ಸರ್ಕಾರಿ ಅಧಿಸೂಚನೆ ಸಂಖ್ಯೆ : ಎಲ್ಎಡಬ್ಲ್ಯೂ 144/ಎಲ್ಎಸಿ–09, ದಿಃ 2–11–09.

3. ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಸಿಎ II 164/09 ದಿನಾಂಕ 18–3–10.

4. ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ರವರ ಪತ್ರ ಸಂಖ್ಯೆ: ಎಲ್‌ಸಿಎ I/220/96 ದಿನಾಂಕ 8–3–2010.

ಈ ಕಛೇರಿಯ ಅಧಿಸೂಚನೆ ಸಂಖ್ಯೆ ಎ.ಡಿ.ಎಂ. 3 ಃ 2010, ದಿನಾಂಕ 28.05.2010 ರಲ್ಲಿ ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿಗಳನ್ನು ಕರೆದಿದ್ದು, ಬಂದ ಅರ್ಹ ಅಭ್ಯರ್ಥಿಗಳಿಗೆ ಅರ್ಹತಾ ಪರೀಕ್ಷೆಯನ್ನು ನೀಡಿದ್ದು, ಪರೀಕ್ಷೆಯಲ್ಲಿ ಅಗತ್ಯ ಅಭ್ಯರ್ಥಿಗಳು ತೇರ್ಗಡೆಯಾಗದ ಕಾರಣ, ಪುನಃ ಈ ಅಧಿಸೂಚನೆಯನ್ವಯ ಕೋಲಾರ ಜಿಲ್ಲಾ ಮತ್ತು ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಐದು ಶೀಘ್ರಲಿಪಿಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯ ಜೊತೆಗೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ 05.03.2011,**

**ಅಪರಾಹ್ನ 5–00 ಗಂಟೆಯವರೆಗೆ.**

**ಶೀಘ್ರಲಿಪಿಗಾರರು : ಖಾಲಿ ಇರುವ ಹುದ್ದೆಗಳು – 05.**

ವೇತನ ಶ್ರೇಣಿಃ 7275–175–7800–200–8600–225–9500–250–10500–300–12300–350–13350.

ಪ್ರಥಮ ರಾಷ್ಟ್ರೀಯ ನ್ಯಾಯಾಂಗ ವೇತನ ಆಯೋಗದ ಶಿಫಾರಸ್ಸಿನಂತೆ, ಸರ್ಕಾರಿ ಆದೇಶ ಸಂಖ್ಯೆ ಲಾ 128 ಎಲ್.ಎ.ಸಿ. 2005 ದಿನಾಂಕ 14.07.2008 ಮತ್ತು 29.10.2010 ರನ್ವಯ ಒಂದು ಹೆಚ್ಚುವರಿ ವೇತನ ಮುಂಬಡ್ತಿಗೆ ಅರ್ಹರಿರುತ್ತಾರೆ.

**ಹುದ್ದೆಗಳ ವರ್ಗೀಕರಣ**

| ಮೀಸಲಾತಿ | ಮಹಿಳಾ ಅಭ್ಯರ್ಥಿ | ಗ್ರಾಮೀಣ ಅಭ್ಯರ್ಥಿ | ಅಂಗವಿಕಲ | ಮಾಜಿ ಸೈನಿಕ | ಕನ್ನಡ ಮಾಧ್ಯಮ ಅಭ್ಯರ್ಥಿ | ಯೋಜನಾ ನಿರಾಶ್ರಿತ ಅಭ್ಯರ್ಥಿ | ಇತರೆ | ಒಟ್ಟು ಹುದ್ದೆಗಳು |
|---|---|---|---|---|---|---|---|---|
| ಸಾಮಾನ್ಯ | – | 1 | – | – | – | – | 1 | 2 |
| ii– ಎ | 1 | – | – | – | – | – | – | 1 |
| ii– ಬಿ | – | – | – | – | – | – | 1 | 1 |
| ಪ.ಜಾತಿ | – | 1 | – | – | – | – | – | 1 |
| **ಒಟ್ಟು** | **1** | **2** | – | – | – | – | **2** | **5** |

**ವಿದ್ಯಾರ್ಹತೆ :** ಎಸ್.ಎಸ್.ಎಲ್.ಸಿ; ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯವರು ನಡೆಸುವ ಕನ್ನಡ ಮತ್ತು ಇಂಗ್ಲಿಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಮತ್ತು ಶೀಘ್ರಲಿಪಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

ಆಯ್ಕೆಯ ವಿಧಾನ : ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು ನಿಮಿಷ ಒಂದಕ್ಕೆ 120 ಪದಗಳ ದರದಲ್ಲಿ 5 ನಿಮಿಷಗಳ ಉಕ್ತಲೇಖನವನ್ನು ತೆಗೆದುಕೊಂಡು, ಉಕ್ತಲೇಖನವನ್ನು 45 ನಿಮಿಷಗಳಲ್ಲಿ ಅನುಲಿಪಿ ಮಾಡುವ ಅರ್ಹತಾ ಪರೀಕ್ಷಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ:** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 5 ಅಂಕಗಳನ್ನೊಳಗೊಂಡಿರುತ್ತದೆ.

ಮಹಿಳಾ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿಗಳಲ್ಲಿ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಸದರಿ ಹುದ್ದೆಗಳನ್ನು ಸಾಮಾನ್ಯ ಇತರೆ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಕೋಲಾರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿ:**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಠ ವಯೋಮಿತಿ

| ಸಾಮಾನ್ಯ ವರ್ಗ | 35 ವರ್ಷ |
|---|---|
| 2ಎ, 2ಬಿ, 3ಎ , 3 ಬಿ | 38 ವರ್ಷ |
| ಪ. ಜಾತಿ , ಪ. ಪಂಗಡ , ಪ್ರವರ್ಗ – 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಲಿಕೆ :**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಟ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.

**ಪರಿವೀಕ್ಷಣಾ ಅವಧಿ :**

ಆಯ್ದೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ :**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ :**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ/ಕಂಪ್ಯೂಟರ್ ಮೂಲಕ ತಯಾರಿಸಿ,, **ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು.** ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು

ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದಂತೆ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ಧೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೋಲಾರ–563 101**, ಇವರಿಗೆ ದಿ : 05–03–2011 ಅಪರಾಹ್ನ 5–00 ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ಧೃಢಿಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರ.
2. ಜನ್ಮ ದಿನಾಂಕದ ಧೃಡೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ/ಕ್ಯುಮುಲೇಟೀವ್ ರೆಕಾರ್ಡ್/ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ'ಯಲ್ಲಿ ಪ್ರವರ್ಗ–1 ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಶೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆ–2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2 ರ ಜೊತೆ ನಮೂನೆ–1 ರಲ್ಲೂ ಧೃಢಿಕರಣ ಪತ್ರವನ್ನು ಸಲ್ಲಿಸುವುದು.
7. ವಿಧವೆಯರು, ಜೀತ ಕಾರ್ಮಿಕರು ವಯೋಮಿತಿ ರಿಯಾಯ್ತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣಪತ್ರವನ್ನು ಸಲ್ಲಿಸುವುದು.
8. ಅರ್ಜಿಯನ್ನು ಕಳುಹಿಸಲು ನಿಗದಿಪಡಿಸಿದ ದಿನಾಂಕದಂದು 6 ತಿಂಗಳ ಒಳಗೆ ಇಬ್ಬರು ಗೌರವಾನ್ವಿತ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣಪತ್ರವನ್ನು ಸಲ್ಲಿಸುವುದು.
9. ಸ್ವಯಂ ವಿಳಾಸವಿರುವ ರೂ 5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.
10. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಪ್ರವರ್ಗ–1 ರ ಅಭ್ಯರ್ಥಿಗಳು ಅರ್ಜಿಯೊಂದಿಗೆ 20/– ರೂಗಳ ಐ.ಪಿ.ಓ ಅಥವಾ ಡಿ.ಡಿ ಹಾಗೂ ಉಳಿದ ವರ್ಗಗಳ ಅಭ್ಯರ್ಥಿಗಳು ಅರ್ಜಿಯೊಂದಿಗೆ 50/– ರೂಗಳ ಐ.ಪಿ.ಓ ಅಥವಾ ಡಿ.ಡಿಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ, ಇವರ ಹೆಸರಿಗೆ ಪಡೆದು ಲಗತ್ತಿಸತಕ್ಕದ್ದು.

**ವಿಶೇಷ ಸೂಚನೆ:**

**ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ಧೃಡೀಕರಿಸಿರಬೇಕು.**

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗಿರುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ವೀರಣ್ಣ .ಜಿ. ತಿಗಡಿ**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ.

**ಅರ್ಜಿ ನಮೂನೆ**

| |
|---|
| ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು |

ರವರಿಗೆ,

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,

ಕೋಲಾರ.

ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಎಡಿಎಂ/1/2011, ದಿಃ 31–01–2011 ರ ಮೇರೆಗೆ ನಾನು ಶೀಘ್ರಲಿಪಿಗಾರರ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ/ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 9 | ಲಿಂಗ | ಪುರುಷ | | ಮಹಿಳೆ |
| | | | | |
| 7 | ರಾಷ್ಟ್ರೀಯತೆ | | | |
| 8 | ಧರ್ಮ ಮತ್ತು ಜಾತಿ | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | | ಅವಿವಾಹಿತ |
| | | | | |
| 10 | ಕೋರುವ ಮೀಸಲಾತಿಗಳು (ಕೋರುವ ಮೀಸಲಾತಿಯನ್ನು ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ಧೃಡೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಗ್ರಾಮೀಣ |
| | | | | |
| | | 2–ಎ ಮಹಿಳೆ | 2ಬಿ | |
| | | | | |
| 12 | **ವಿದ್ಯಾರ್ಹತೆ** ಃ (ಸ್ವಯಂ ಧೃಢಿಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | ಗರಿಷ್ಟ ಅಂಕಗಳು | ಗಳಿಸಿದ ಅಂಕಗಳು |
| | ಎಸ್.ಎಸ್.ಎಲ್.ಸಿ; | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | |
| | ಕನ್ನಡ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಆಂಗ್ಲ ಶೀಘ್ರಲಿಪಿ (ಹಿರಿಯ ಶ್ರೇಣಿ) | | | |
| | ಇತರೆ ಯಾವುದೇ ವಿದ್ಯಾರ್ಹತೆ (ಸೂಚನೆಃ ಅನ್ವಯಿಸುವ ವಿದ್ಯಾರ್ಹತೆಯ ಅಂಕಣಗಳನ್ನು ಮಾತ್ರ ಭರ್ತಿ ಮಾಡುವುದು) | | | |
| 13 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರ? (ಸರ್ಕಾರಿ ಸೇವೆಯಲ್ಲಿದ್ದಲ್ಲಿ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪತ್ರದ ನಕಲನ್ನು ಲಗತ್ತಿಸಬೇಕು) | ಹೌದು | | ಇಲ್ಲ |
| | | | | |
| 14 | ಅಭ್ಯರ್ಥಿಯ ಖಾಯಂ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 15 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ | | | |
| 16 | ನಿಮ್ಮ ಸ್ವವಿಳಾಸವಿರುವ ರೂ.5/– ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರ? | | | |
| 17 | ಐ.ಪಿ.ಓ ಅಥವಾ ಡಿ.ಡಿ. ಸಂಖ್ಯೆ ಮತ್ತು ದಿನಾಂಕ | | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

ಸ್ಥಳ ಃ

ದಿನಾಂಕಃ ಅಭ್ಯರ್ಥಿಯ ಸಹಿ.

ಪಿ.ಆರ್.73

**ಕರ್ನಾಟಕ ಸರ್ಕಾರ**

**ಅರಣ್ಯ ಇಲಾಖೆ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಪ್ರಾದೇಶಿಕ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ**

**ಅರಣ್ಯ ಕಾಮಗಾರಿಗಳ ಟೆಂಡರ್ ಪ್ರಕಟಣೆ**

**ಸಂಖ್ಯೆ: ಎ2/ಬಿಯುಡಿ/ಸಿಆರ್–10–2010–11, ದಿನಾಂಕ: 20–12–2010**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, 2010–11ನೇ ಸಾಲಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿಕ್ಕಬಳ್ಳಾಪುರ ವಿಭಾಗದ ವ್ಯಾಪ್ತಿಗೊಳಪಟ್ಟಿರುವ ವಲಯಗಳಲ್ಲಿ ಕೆ.ಎಫ್.ಡಿ.ಎಫ್. ಯೋಜನೆಗಳಲ್ಲಿ ಕಾಲಬದ್ಧ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಈ ವಿಭಾಗದಲ್ಲಿ ನೋಂದಾಯಿಸಿರುವ ಅರಣ್ಯ ಗುತ್ತಿಗೆದಾರರಿಂದ ಪ್ರತಿಯೊಂದು ಕಾಮಗಾರಿಗಳಿಗೆ ಪ್ರತ್ಯೇಕ ಟೆಂಡರ್ ಕರೆಯಲಾಗಿದೆ.

ದಿನಾಂಕ: 18–02–2011 ರಂದು ಅಪರಾಹ್ನ 3–00 ಗಂಟೆಗೆ ಮೊಹರು ಮಾಡಿದ ಟೆಂಡರ್ ಸಲ್ಲಿಸುವುದು. ಅದೇ ದಿನ ಕೆಳಗೆ ಸಹಿ ಮಾಡಿದವರು ಅಥವಾ ಇವರಿಂದ ಅಧಿಕೃತವಾಗಿ ನೇಮಿಸಲ್ಪಟ್ಟವರು ಟೆಂಡರ್ ದಾರರ ಸಮ್ಮುಖದಲ್ಲಿ ಟೆಂಡರ್ ಲಕೋಟೆಗಳನ್ನು ಅಪರಾಹ್ನ 3.30 ಗಂಟೆಗೆ ತೆರೆಯುವರು ಮತ್ತು ಸದರಿ ದಿನಾಂಕದಂದು ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ: 20–02–2011 ರಂದು ಅಪರಾಹ್ನ 3.00 ಗಂಟೆಯೊಳಗೆ ಎರಡನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್ ಗಳನ್ನು ಸ್ವೀಕೃತಿ ಮಾಡಲಾಗುವುದು ಮತ್ತು ಸದರಿ ದಿನಾಂಕದಂದು 3.00 ಗಂಟೆಯೊಳಗೆ ಟೆಂಡರ್ ಗಳನ್ನು ತೆರೆಯಲಾಗುವುದು. ಗುತ್ತಿದಾರರು ಟೆಂಡರ್ ನಲ್ಲಿ ಭಾಗವಹಿಸದಿದ್ದಲ್ಲಿ ಕಾರಣಾಂತರದಿಂದ ಟೆಂಡರ್ ನಡೆಯದಿದ್ದರೆ ಇದೇ ಪ್ರಕಟಣೆಯ ಷರತ್ತಿಗೆ ಒಳಪಟ್ಟು ಪುನ: ದಿನಾಂಕ: 22–02–2011 ರಂದು ಅಪರಾಹ್ನ 3.00 ಗಂಟೆಯೊಳಗೆ ಮೂರನೇ ಬಾರಿಗೆ ನೋಂದಾಯಿತ ಇಚ್ಛೆಯುಳ್ಳ ಅರಣ್ಯ ಗುತ್ತಿಗೆದಾರರಿಂದ ಭರ್ತಿ ಮಾಡಿ ಸಲ್ಲಿಸುವ ಟೆಂಡರ್ ಗಳನ್ನು ಸ್ವೀಕೃತಿ ಮಾಡಲಾಗುವುದು ಟೆಂಡರ್ ಲಕೋಟೆಗಳನ್ನು ಅಪರಾಹ್ನ 3.30 ಗಂಟೆಗೆ ಟೆಂಡರ್ ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಬಗ್ಗೆ ಮತ್ತೆ ಪ್ರತ್ಯೇಕವಾದ ಪ್ರಕಟಣೆ ಹೊರಡಿಸುವುದಿಲ್ಲ. ಟೆಂಡರ್ ಫಾರಂಗಳನ್ನು ಪಡೆಯುವ ಬಗ್ಗೆ ಮತ್ತು ಕಾಮಗಾರಿಗಳ ವಿವರಗಳ ಬಗ್ಗೆ ಈ ಕಛೇರಿಯನ್ನು ಕೆಲಸದ ವೇಳೆ ಸಂಪರ್ಕಿಸಬಹುದಾಗಿರುತ್ತದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್.64 ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ.

**Government of Karnataka**

**DEPARTMENT OF HORTICULTURE**

**Directorate of Horticulture, Lalbagh, Bangalore-4**

**TENDER NOTIFICATION**

**Tender Notification** No.**DH/ADH/Flori/AHO/13/2010-11, Date:25-1-2011**

**(2-Cover system)**

**NOTICE FOR INVITING TENDER FOR CONSTRUCTION OF FLOWER AUCTION CENTER AT SIRSI, UTTAR KANNADA DISTRICT, KARNATAKA**

The Department of Horticulture, Government of Karnataka, invites sealed **tenders** in prescribed format from reputed, technically competent and experienced firms for the **construction of Flower Auction Center at Therakanahalli Horticulture Farm, Sirsi, Uttara Kannda District, Karnataka, comprising of auction rooms, office / administrative block, cool room, canteen, full length corridor, compound wall, Marketing Information Centre, Farmers Rest Room, external infrastructures such as power, water, road connectivity, etc, internal infrastructures such as internal roads, water, sewerage network, electrical power distribution network, vehicle parking space, solid waste handling network, etc, under Rashtriya Krishi Vikasa Yojana (RKVY)**.

The total approximate cost for the construction of the above infrastructures would be **Rs.200.00 lakhs.** The tender documents containing terms and conditions, scope and nature of work, technical and quality specifications and other details can be obtained from the office of the **Additional Director of Horticulture (Fruits & Flowers),** Directorate of Horticulture, Lalbagh, **Bangalore – 560 004**.

Tender documents would be issued against **requisitions** from interested firms from **5-3-2011 to 14-3-2011** on working days from **10.00 am to 3.00 pm,** on payment of non transferable/non refundable fee of **Rs. 5000 + 12.5% tax (Total Rs. 5,625/-)** by way of demand draft (DD) from any nationalized bank, drawn in favour of **Assistant Director of Horticulture (Floriculture Section), Lalbagh**, **Bangalore - 04, payable at Bangalore.**

The completed Technical and Financial bids in sealed envelopes addressed to the Office of the **Additional Director of Horticulture**,(Fruits and Flowers)**Lalbagh, Bangalore**, along with an **EMD of Rs.3.60 lakhs (Three Lakhs Sixty Thousand Rupees Only)** in the form of Demand Draft drawn in favour of **Director of Horticulture, Lalbagh Bangalore,** purchased from any Nationalized Bank, payable at Bangalore, should be submitted latest by **16-3-2011, before 5:00 pm**. **The EMD demand draft should be enclosed with the technical bid.** The technical bid will be opened on **17-3-2011 at 11.00** am in the Mini-Meeting Hall, Directorate of Horticulture, Lalbagh, Bangalore – 560 004, in the presence of tender committee members & bidders/their authorized representatives. The qualifeid financial bids will be opened at **11.00 am on 21-3-2011** in the above mentioned venue. The undersigned reserves the right to reject any /all tenders without assigning any reason. For additional Information contact **Assistant Director of Horticulture (Floriculture), Lalbagh, Bangalore - 04, Ph.No:080-26573154**.

**Director of Horticulture**

**Government of Karnataka**

**(Department of Horticulture)**

**Director of Horticulture, Lalbagh, Bangalore - 4**

**No.DH/ADH/Flori/AHO/13/2010-11, Dated: 2-2-2011**

**Tender Notification for Construction of Infrastructure Facilities for Establishment of Flower Auction Centres at Therakanahalli Horticulture Farm, Sirsi, Uttara Kannada District, Karnataka**

Sealed tenders are invited for Construction of Infrastructure Facilities for Establishment of Flower Auction Centres at **Therakanhalli Horticulture Farm, Sirsi, Uttara Kananda district** under RKVY project by Department of Horticulture, from reputed, technically competent and experienced firms / group of individuals. The estimated cost for the Construction of Flower Auction Centre is **Rs.200.00 lakhs**. The tender documents can be collected from **5-3-2011 to 14-3-2011** on payment of **Rs.5,625/- (Rupees Five Thousand Six Hundred Twenty Five only).** The last date for submitting the filled tender documents is **16-3-2011 before 5.00 pm**. The technical bid will be **opened on 17-3-2011** at **11.00 am** and the financial bid will be **opened on 21-3-2010 at 11.00** am, in the Mini Meeting Hall, **Directorate of Horticulture**, Lalbagh, Bangalore - 4. For further details please contact the **Assistant Director of Horticulture** (Floriculture), Lalbagh, Bangalore, (Phone: 080 - 26573154).

**Director of Horticulture**

**ಕರ್ನಾಟಕ ಸರ್ಕಾರ**

**(ತೋಟಗಾರಿಕೆ ಇಲಾಖೆ)**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು–4**

**ಟೆಂಡರ್ ಪ್ರಕಟಣೆ**

**(ದ್ವಿ ಲಕೋಟೆಗಳಲ್ಲಿ)**

**ಸಂಖ್ಯೆ:ತೋಇ/ಸತೋನಿ/ಪುವಿ/ಸತೋಅ/13/2010–11, ದಿನಾಂಕ:25–1–2011**

**ಉತ್ತರ ಕನ್ನಡ ಜಿಲ್ಲೆ ಸಿರ್ಸಿಯಲ್ಲಿ ಪುಷ್ಪ ಹರಾಜು ಕೇಂದ್ರಗಳ ಕಟ್ಟಡ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ಟೆಂಡರ್ ಆಹ್ವಾನ**

ತೋಟಗಾರಿಕೆ ಇಲಾಖೆ, ಕರ್ನಾಟಕ ಸರ್ಕಾರವು ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ಪರಿಣಿತ ಹಾಗೂ ಅರ್ಹ ಸಂಸ್ಥೆಗಳಿಂದ **ತೆರಕನಹಳ್ಳಿ ತೋಟಗಾರಿಕೆ ಕ್ಷೇತ್ರ, ಸಿರ್ಸಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಪುಷ್ಪ ಹರಾಜು ಕೇಂದ್ರದ ಆಡಳಿತ ಕಛೇರಿ, ಹವಾನಿಯಂತ್ರಿತ ಕೊಠಡಿ, ಮಾರುಕಟ್ಟೆ ಮಾಹಿತಿ ಕೇಂದ್ರ, ಕ್ಯಾಂಟೀನ್, ವಿಶ್ರಾಂತಿ ಗೃಹ, ಶೌಚಾಲಯ, Full length corridor, ಕಾಂಪೋಂಡ್ ಗೋಡೆ, ಹೊರಾಂಗಣ ಮೂಲಭೂತ ಸೌಕರ್ಯಗಳಾದ ವಿದ್ಯುತ್, ನೀರು, ರಸ್ತೆ, ಒಳಚರಂಡಿ ವ್ಯವಸ್ಥೆ, ವಾಹನಗಳ ನಿಲುಗಡೆ ಸ್ಥಳ, ಇತ್ಯಾದಿ ಘಟಕಗಳನ್ನು ಒಳಗೊಂಡ ಪುಷ್ಪ ಹರಾಜು ಕೇಂದ್ರದ ಕಟ್ಟದ ನಿರ್ಮಾಣಕ್ಕೆ ನಿಗಧಿತ ನಮೂನೆಯಲ್ಲಿ ಸೀಲಾದ ದ್ವಿಲಕೋಟೆಗಳಲ್ಲಿ ಟೆಂಡರನ್ನು ಆಹ್ವಾನಿಸಿದೆ.**

ಈ ಮೇಲ್ಕಂಡ ಮೂಲಭೂತ ಸೌಲಭ್ಯದ ನಿರ್ಮಾಣದ ಅಂದಾಜು ವೆಚ್ಚ **ರೂ.200.00 ಲಕ್ಷಗಳು**. ಕಾರ್ಯವಿಧಾನ ಮತ್ತು ಕಾರ್ಯವ್ಯಾಪ್ತಿಯ ವಿವರ, ನಿಬಂಧನೆ ಮತ್ತು ಷರತ್ತುಗಳು, ತಾಂತ್ರಿಕ ಮತ್ತು ಗುಣಮಟ್ಟದ ವೈಶಿಷ್ಟತೆಗಳು ಮತ್ತಿತರೆ ವಿವರಗಳನ್ನೊಳಗೊಂಡ ಟೆಂಡರ್ ಡಾಕ್ಯುಮೆಂಟ್‌ನ್ನು **ತೋಟಗಾರಿಕೆ ಅಪರ ನಿರ್ದೇಶಕರು (ಹಣ್ಣುಗಳು ಮತ್ತು ಪುಷ್ಪಾಭಿವೃದ್ಧಿ), ಲಾಲ್‌ಬಾಗ್, ಬೆಂಗಳೂರು–4,** ರವರ ಕಛೇರಿಯಿಂದ ಪಡೆಯಬಹುದಾಗಿರುತ್ತದೆ.

ಟೆಂಡರ್ ಡಾಕ್ಯುಮೆಂಟ್‌ಗಳನ್ನು ಆಸಕ್ತ ಸಂಸ್ಥೆಗಳ ಕೋರಿಕೆ ಮೇರೆಗೆ **ದಿನಾಂಕ:5–3–2011 ರಿಂದ 14–3–2011 ರವರೆಗೆ** ಕಛೇರಿ ಕೆಲಸದ ದಿವಸಗಳಲ್ಲಿ ಬೆಳಿಗ್ಗೆ **10.00 ಗಂಟೆಯಿಂದ ಸಂಜೆ 3.00 ಗಂಟೆಯವರೆಗೆ** ವಿತರಿಸಲಾಗುವುದು. ಟೆಂಡರ್ ಡಾಕ್ಯುಮೆಂಟ್‌ಗೆ ಶುಲ್ಕ **ರೂ.5,000/– + 12.5% ತೆರಿಗೆ (ಒಟ್ಟು ರೂ.5,625/–)** ಗಳನ್ನು **ಸಹಾಯಕ ತೋಟಗಾರಿಕೆ ನಿರ್ದೇಶಕರು (ಪುಷ್ಪಾಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು,** ರವರ ಹೆಸರಿನಲ್ಲಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಖರೀದಿಸಿದ ಡಿಮ್ಯಾಂಡ್ ಡ್ರ್ಯಾಫ್ಟ್‌ನ ರೂಪದಲ್ಲಿ ಪಾವತಿಸಿ, ಡಾಕ್ಯುಮೆಂಟ್‌ನ್ನು ಪಡೆಯಬಹುದಾಗಿರುತ್ತದೆ. ಈ ಶುಲ್ಕವನ್ನು ಹಿಂತಿರುಗಿಸಲಾಗುವುದಿಲ್ಲ / ವರ್ಗಾಯಿಸಲಾಗುವುದಿಲ್ಲ.

ಸಂಪೂರ್ಣವಾಗಿ ಭರ್ತಿ ಮಾಡಿದ ತಾಂತ್ರಿಕ ಮತ್ತು ಆರ್ಥಿಕ ಬಿಡ್‌ಗಳನ್ನು **ಮೊಹರಾದ ಲಕೋಟೆಗಳಲ್ಲಿ ತೋಟಗಾರಿಕೆ ಅಪರ ನಿರ್ದೇಶಕರು(ಹಣ್ಣು ಮತ್ತು ಪುಷ್ಪಾಭಿವೃದ್ಧಿ) ಲಾಲ್‌ಬಾಗ್, ಬೆಂಗಳೂರು–04,** ರವರಿಗೆ ವಿಳಾಸಿಸಿ, **ದಿನಾಂಕ: 16–3–2011** ರಂದು **ಸಂಜೆ 5.00 ಗಂಟೆ**ಯೊಳಗೆ ಸಲ್ಲಿಸುವುದು. **EMD ಮೊತ್ತ ರೂ.3.60 ಲಕ್ಷಗಳಿಗೆ (ಮೂರು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ), ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು, ರವರ ಹೆಸರಿನಲ್ಲಿ** ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಖರೀದಿಸಿದ ಡಿಮ್ಯಾಂಡ್ ಡ್ರ್ಯಾಫ್ಟ್‌ನ್ನು **ತಾಂತ್ರಿಕ ಬಿಡ್‌ನೊಂದಿಗೆ ಲಗತ್ತಿಸಬೇಕು.** ತಾಂತ್ರಿಕ ಬಿಡ್‌ಗಳನ್ನು **ದಿನಾಂಕ:17–3–2011** ರಂದು ಬೆಳಿಗ್ಗೆ **11.00** ಗಂಟೆಗೆ ಬೆಂಗಳೂರಿನ ಲಾಲ್‌ಬಾಗ್‌ನಲ್ಲಿರುವ ತೋಟಗಾರಿಕೆ ನಿರ್ದೇಶನಾಲಯದ **ಕಿರು ಸಭಾಂಗಣದಲ್ಲಿ,** ಟೆಂಡರ್ ಸಮಿತಿ ಸದಸ್ಯರು ಹಾಗೂ ಟೆಂಡರ್‌ದಾರರು / ಅವರ ಅಧೀಕೃತ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಅರ್ಹಗೊಂಡವರ ಆರ್ಥಿಕ ಬಿಡ್‌ಗಳನ್ನು **ದಿನಾಂಕ:21–3–2011** ರಂದು **ಬೆಳಿಗ್ಗೆ 11.00 ಗಂಟೆಗೆ** ಮೇಲ್ಕಂಡ ಸ್ಥಳದಲ್ಲೇ ತೆರೆಯಲಾಗುವುದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಈ ಕೆಳಸಹಿದಾರರು ಹೊಂದಿರುತ್ತಾರೆ. ಹೆಚ್ಚಿನ ವಿವರಗಳನ್ನು **ಸಹಾಯಕ ತೋಟಗಾರಿಕೆ ನಿರ್ದೇಶಕರು, (ಪುಷ್ಪಾಭಿವೃದ್ಧಿ ವಿಭಾಗ), ಲಾಲ್‌ಬಾಗ್, ಬೆಂಗಳೂರು,** ರವರನ್ನು ಸಂಪರ್ಕಿಸಿ, (**ದೂರವಾಣಿ ಸಂ:26573154**) ಪಡೆಯಬಹುದಾಗಿರುತ್ತದೆ.

**ತೋಟಗಾರಿಕೆ ನಿರ್ದೇಶಕರು**

**ಕರ್ನಾಟಕ ಸರ್ಕಾರ**

**(ತೋಟಗಾರಿಕೆ ಇಲಾಖೆ)**

**ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು**

**ಸಂಖ್ಯೆ:ತೋಇ:ಸತೋನಿ:ಪುವಿ:ಸತೋಅ:13:2010–11, ದಿನಾಂಕ:2–2–2011**

**ತೋಟಗಾರಿಕೆ ಇಲಾಖೆಯ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ತೆರಕನಹಳ್ಳಿ ತೋಟಗಾರಿಕೆ ಕ್ಷೇತ್ರ, ಸಿರ್ಸಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಪುಷ್ಪ ಹರಾಜು ಕೇಂದ್ರದ ಕಟ್ಟಡದ ಕಾಮಾಗಾರಿಗಳನ್ನು ಕೈಗೊಳ್ಳಲು ಟೆಂಡರ್ ಪ್ರಕಟಣೆ**

ತೋಟಗಾರಿಕೆ ಇಲಾಖೆಯ ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ **ತೆರಕನಹಳ್ಳಿ ತೋಟಗಾರಿಕೆ ಕ್ಷೇತ್ರ, ಸಿರ್ಸಿ, ಉತ್ತರ ಕನ್ನಡ ಜಿಲ್ಲೆಯಲ್ಲಿ** ಪುಷ್ಪ ಹರಾಜು ಕೇಂದ್ರದ ಕಟ್ಟಡದ ಕಾಮಗಾರಿಗಳನ್ನು ಕೈಗೊಳ್ಳಲು ನುರಿತ ತಂತ್ರಜ್ಞ ಹಾಗೂ ಅನುಭವಿ ಸಂಸ್ಥೆ / ವ್ಯಕ್ತಿಗಳಿಂದ ಶೀಲು ಮಾಡಿದ ಟೆಂಡರ್ ಅನ್ನು ಆಹ್ವಾನಿಸಲಾಗಿದೆ. ಸದರಿ ಪುಷ್ಪ ಹರಾಜು ಕೇಂದ್ರದ ನಿರ್ಮಾಣದ ಅಂದಾಜು ವೆಚ್ಚ **ರೂ.200.00 ಲಕ್ಷಗಳು.** ಟೆಂಡರ್ ಫಾರಂಗಳನ್ನು **ದಿನಾಂಕ:5–3–2011 ರಿಂದ 14–3–2011 ವರೆಗೆ** ಪಡೆಯಬಹುದಾಗಿರುತ್ತದೆ. **ಟೆಂಡರ್ ಫಾರಂ ಬೆಲೆ ರೂ.5,625/– (ರೂ. ಐದು ಸಾವಿರದ ಆರು ನೂರ ಇಪ್ಪತ್ತೈದು).** ಭರ್ತಿಮಾಡಿದ ಅಲ್ಪಾವಧಿ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ **ದಿನಾಂಕ:16–1–2010 (ಸಂಜೆ 5.00 ಗಂಟೆ).** ತಾಂತ್ರಿಕ ಬಿಡ್ಡುಗಳನ್ನು **ದಿನಾಂಕ:17–3–2011 ಬೆಳಿಗ್ಗೆ 11.00 ಗಂಟೆಗೆ** ಹಾಗೂ ಆರ್ಥಿಕ ಬಿಡ್ಡುಗಳನ್ನು **ದಿನಾಂಕ:21–3–2011 ರಂದು ಬೆಳಿಗ್ಗೆ 11.00** ಗಂಟೆಗೆ **ಕಿರು ಸಭಾಂಗಣ, ತೋಟಗಾರಿಕೆ ನಿರ್ದೇಶನಾಲಯ, ಲಾಲ್‌ಬಾಗ್, ಬೆಂಗಳೂರು–4,** ಇಲ್ಲಿ ತೆರೆಯಲಾಗುವುದು. ಹೆಚ್ಚಿನ ವಿವರಗಳಿಗಾಗಿ ಸಹಾಯಕ ತೋಟಗಾರಿಕೆ ನಿರ್ದೇಶಕರು (ಪುಷ್ಪಾಭಿವೃದ್ಧಿ ವಿಭಾಗ), ಲಾಲ್‌ಬಾಗ್, ಬೆಂಗಳೂರು, ರವರನ್ನು ಸಂಪರ್ಕಿಸಬಹುದು. (ದೂರವಾಣಿ ಸಂಖ್ಯೆ 080 – 26573154).

ಪಿ.ಆರ್.70 **ತೋಟಗಾರಿಕೆ ನಿರ್ದೇಶಕರು**

**(ತೋಟಗಾರಿಕೆ ಇಲಾಖೆ)**

**ಲಾಲ್‌ಬಾಗ್, ಬೆಂಗಳೂರು–560004**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಇ/ತೋಜೆ/ ತಾಸ–2/8 /2010–11, ದಿನಾಂಕ: 1/2/2011**

**ತೋಟಗಾರಿಕೆ ಇಲಾಖೆವತಿಯಿಂದ ತುಂಬೆ ತೋಟಗಾರಿಕೆ ಕ್ಷೇತ್ರ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೀರಾ ಉತ್ಪಾದನಾ ಘಟಕ ಸ್ಥಾಪಿಸಲು ಬೇಕಾಗುವ ಯಂತ್ರೋಪಕರಣಗಳ ಸರಬರಾಜು ಅಳವಡಿಕೆ ಹಾಗು ಕಾರ್ಯಭಾರಗೊಳಿಸಲು ಟರ್ನ್ ಕೀ ಆಧಾರದ ಟೆಂಡರ್ ಆಹ್ವಾನ**

ತೋಟಗಾರಿಕೆ ಇಲಾಖೆಯ ತುಂಬೆ ತೋಟಗಾರಿಕೆ ಕ್ಷೇತ್ರ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ನೀರಾ ಉತ್ಪಾದನಾ ಘಟಕ ಸ್ಥಾಪನೆಗೆ ಅಗತ್ಯವಿರುವ ಯಂತ್ರೋಪಕರಣಗಳ ಸರಬರಾಜು, ಅಳವಡಿಕೆ ಹಾಗೂ ಕಾರ್ಯಭಾರಗೊಳಿಸಲು ಟರ್ನ್ ಕೀ ಆಧಾರದ ಮೇಲೆ ನೇಮಿಸಿಕೊಳ್ಳಲು, ನುರಿತ ತಂತ್ರಜ್ಞ ಹಾಗೂ ಅನುಭವಿ ಸಂಸ್ಥೆಗಳಿಂದ ಮೊಹರಾದ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಆಹ್ವಾನಿಸಿದೆ. ಈ ಯೋಜನೆಗೆ ಒಟ್ಟಾರೆ ಅಂದಾಜು ವೆಚ್ಚ ರೂ.100.00 ಲಕ್ಷಗಳು, ಸೇವಾ ವ್ಯಾಪ್ತಿಹಾಗೂ ಟೆಂಡರ್‌ನ ವಿವರವಾದ ಷರತ್ತುಗಳು ಮತ್ತು ನಿಬಂಧನೆಗಳನ್ನೊಳಗೊಂಡ ಟೆಂಡರ್ ದಾಖಲಾತಿಗಳನ್ನು **ತೋಟಗಾರಿಕೆ ಜಂಟಿ ನಿರ್ದೇಶಕರು (ತೋಟದ ಬೆಳೆಗಳು & ಸಸ್ಯ ಸಂರಕ್ಷಣೆ) ಲಾಲ್‌ಬಾಗ್,ಬೆಂಗಳೂರು** ರವರ ಕಛೇರಿಯಲ್ಲಿ ಪಡೆಯಬಹುದಾಗಿದೆ. ಆಸಕ್ತಿಯುಳ್ಳವರು ಟೆಂಡರ್ ದಾಖಲಾತಿಗಳನ್ನು **ದಿನಾಂಕ: 17–02–2011 ರಿಂದ 26–02–2011** ವರೆಗೆ ಕಛೇರಿ ವೇಳೆಯಲ್ಲಿ (ಬೆಳಿಗ್ಗೆ 10.00 ರಿಂದ ಸಂಜೆ 5.30 ರವರೆಗೆ

ಅರ್ಜಿ ಶುಲ್ಕ ರೂ.500/– + 12.5% ತೆರಿಗೆ (ಒಟ್ಟು ರೂ.562.50) ಅನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ **ತೋಟಗಾರಿಕೆ ಜಂಟಿ ನಿರ್ದೇಶಕರು (ತೋಟದ ಬೆಳೆಗಳು & ಸಸ್ಯ ಸಂರಕ್ಷಣೆ) ಲಾಲ್‌ಭಾಗ್, ಬೆಂಗಳೂರು** ರವರ ಹೆಸರಿನಲ್ಲಿ ಡಿ.ಡಿ ಯನ್ನು ಪಾವತಿಸಿ ಪಡೆಯಬಹುದಾಗಿರುತ್ತದೆ. ಇ.ಎಂ.ಡಿ ಮೊತ್ತ ರೂ.1,00,000/– (ಒಂದು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕಿನಿಂದ **ತೋಟಗಾರಿಕೆ ಜಂಟಿ ನಿರ್ದೇಶಕರು (ತೋಟದ ಬೆಳೆಗಳು & ಸಸ್ಯ ಸಂರಕ್ಷಣೆ), ಲಾಲ್‌ಭಾಗ್, ಬೆಂಗಳೂರು** ರವರ ಹೆಸರಿನಲ್ಲಿ ಡಿ.ಡಿ ಯನ್ನು ಪೂರ್ತಿಯಾಗಿ ಮೊಹರಾದ ತಾಂತ್ರಿಕ ಟೆಂಡರ್ ಬಿಡ್ ಇರುವ ಲಕೋಟೆಯ ಜೊತೆಗೆ **ದಿನಾಂಕ: 26.02.2011**ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸುವುದು ತಾಂತ್ರಿಕ ಹಾಗೂ ಆರ್ಥಿಕ ಬಿಡ್‌ಗಳನ್ನು ಪ್ರತ್ಯೇಕ ಲಕೋಟೆಗಳಲ್ಲಿ ಸಲ್ಲಿಸುವುದು. ತಾಂತ್ರಿಕ ಬಿಡ್ ಇರುವ ಲಕೋಟೆಗಳನ್ನು **ದಿನಾಂಕ: 01.03.2011** ರಂದು ಬೆಳಿಗ್ಗೆ 11.00 ಗಂಟೆಗೆ ಸಂಬಂಧಿಸಿದ ಟೆಂಡರ್‌ದಾರರು/ಅವರ ಅಧಿಕೃತ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಆರ್ಥಿಕ ಬಿಡ್‌ಗಳನ್ನು **ದಿನಾಂಕ: 01.03.2011** ಮಧ್ಯಾಹ್ನ 3.00 ಗಂಟೆಗೆ ಸಂಬಂಧಿಸಿದ ಟೆಂಡರ್‌ದಾರರು/ಅವರ ಅಧಿಕೃತ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು ಯಾವುದೇ / ಎಲ್ಲಾ ಬಿಡ್ಡುಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಕೆಳ ಸಹಿದಾರರು ಹೊಂದಿರುತ್ತಾರೆ.

**ತೋಟಗಾರಿಕೆ ನಿರ್ದೇಶಕರು**

**HORTICULTURE DEPARTMENT**

**TENDER NOTICE**

**Tender Notification No. No. DH/PC/AHO-2/8/2010-11, Date:1/2/2011**

**Notice for inviting expression of interest for engaging supply and installation of machinery for construction of new Neera (coconut sap) processing unit on Turnkey basis in Thumbi Horticultural Farm, Dakshina Kannada district , Karnataka**

Department of Horticulture invites sealed tenders in prescribed format in duplicate from reputed, technically competent and experienced firms / group of individuals for taking up Consultancy Service on **'Turn Key'** basis, for establishment of **Neera (coconut sap) processing unit at Thumbi Horticultural Farm, Mangalore district ,Karnataka**. The total approximate cost of establishing new processing unit in the existing building would be Rs.1.00 crore. The terms and conditions, scope and nature of service and other details containing the tender documents, can be obtained from the office of the **Joint Director of Horticulture (Plantation crops and Plant Protection) Lalbagh, Bangalore**. The tender documents would be issued against the requisition from interested parties, from **17-02-2011 to 26-02-2011**, during office hours from 10.00 am to 5.00 pm, on payment of non transferable/ non refundable fee of tender documents of Rs.500/- + 12.5% tax (Total Rs.562.50) by way of demand draft (DD) from any nationalized bank, drawn in favour of the **Joint Director of Horticulture (Plantation crops and Plant Protection), Lalbagh,** payable at Bangalore.

Completed sealed tenders (Financial & Technical bids in separate covers) along with EMD of Rs.1,00,000/- (Rs. One Lakh only), by way of demand draft (DD) drawn in favour of **Joint Director of Horticulture (Plantation crops and Plant Protection), Lalbagh,** payable at Bangalore (along with technical bid) and addressed to Joint Director of Horticulture (Plantation Crops & Plant Protection) Lalbagh, Bangalore, may be submitted latest by **26.02.2011,** before 5.00 pm. The technical bid would be opened on **01.03.2011** at 11.00 am in the presence of tenders/ their authorized representative present. The financial bid would be opened at 03.00 pm on **01.03.2011.** The undersigned reserves the right to reject any/ all tenders without assigning any reason.

PR-71 **Director of Horticulture**

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ನಿರ್ದೇಶನಾಲಯ, ಬಯೋಟೆಕ್ನಾಲಜಿ ಕೇಂದ್ರ, ಹುಳಿಮಾವು, ಬೆಂಗಳೂರು–560076**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಇ:ಜೀವತಾ:ಸತೋನಿ:ಹುತೋ:38:2010–11, ದಿನಾಂಕ:25ನೇ ಜನವರಿ, 2011**

**ವಿಷಯ:** 2011ನೇ ಸಾಲಿನಲ್ಲಿ ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕು ಹುಳಿಮಾವು ತೋಟಗಾರಿಕೆ ಕ್ಷೇತ್ರದಲ್ಲಿ ಬೆಳೆದಿರುವ ಸಪೋಟ, ಮಾವು, ಹಲಸು ಹಾಗೂ ತೆಂಗು ಫಸಲುಗಳ ವಿಲೇವಾರಿ ಮಾಡಲು ಟೆಂಡರ್ ಪ್ರಕಟಣೆಯನ್ನು ಹೊರಡಿಸಿರುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ಮತ್ತು ಹಣ್ಣಿನ ವ್ಯಾಪಾರಿಗಳಿಗೆ ತಿಳಿಸುವುದೇನೆಂದರೆ, 2011ನೇ ಸಾಲಿನಲ್ಲಿ ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ದಕ್ಷಿಣ ತಾಲ್ಲೂಕು ಹುಳಿಮಾವು ತೋಟಗಾರಿಕೆ ಕ್ಷೇತ್ರದಲ್ಲಿ ಬೆಳೆದಿರುವ ಸಪೋಟ, ಮಾವು, ತೆಂಗು ಹಾಗೂ ಹಲಸು ಫಸಲುಗಳನ್ನು ಇದೇ ಕ್ಷೇತ್ರದಲ್ಲಿ ಕೆಳಗೆ ತಿಳಿಸಿರುವ ದಿನಾಂಕ ಮತ್ತು ವೇಳೆಯಲ್ಲಿ ಸಾರ್ವಜನಿಕರ ಸಮಕ್ಷಮದಲ್ಲಿ ಟೆಂಡರ್ ಮೂಲಕ ವಿಲೇವಾರಿ ಮಾಡಲಾಗುವುದು.

| ಕ್ರ ಸಂ. | ತೋಟಗಾರಿಕೆ ಕ್ಷೇತ್ರ ಮತ್ತು ಹರಾಜು ನಡೆಯುವ ಸ್ಥಳ | ವಿಲೇವಾರಿ ಮಾಡುವ ಹಣ್ಣಿನ ಫಸಲು | ಮರಗಳ ಸಂಖ್ಯೆ | ಠೇವಣಿ ಹಣ ರೂ.ಗಳಲ್ಲಿ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಟೆಂಡರ್ ತೆರೆಯುವ ದಿನಾಂಕ ಮತ್ತು ವೇಳೆ |
|---|---|---|---|---|---|---|
| 1. | ಹುಳಿಮಾವು ತೋಟಗಾರಿಕೆ ಕ್ಷೇತ್ರ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–76 | ಸಪೋಟ | 731 ಸಂ. | 5000/– | 25.02.2011 ಮಧ್ಯಾಹ್ನ 1.00 ಗಂಟೆಯವರೆಗೆ | 25.02.2011 ಮಧ್ಯಾಹ್ನ 3.00 ಗಂಟೆಗೆ |
| | | ಮಾವು<br>– ದೊಡ್ಡ ಮರಗಳು<br>– ಸಣ್ಣ ಮರಗಳು | <br>48 ಸಂ.<br>90 ಸಂ. | <br>1000/– | | |
| | | ತೆಂಗು | 180 ಸಂ. | 1000/– | | |
| | | ಹಲಸು | 20 ಸಂ. | 1000/– | | |

ಟೆಂಡರ್‌ನಲ್ಲಿ ಭಾಗವಹಿಸುವವರು ಟೆಂಡರ್ ಫಾರಂನ್ನು ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ತೋಟಗಾರಿಕೆ ಕ್ಷೇತ್ರ ರವರ ಕಛೇರಿಯಿಂದ ರೂ.25.00 ಪಾವತಿಸಿ ಪಡೆಯಬಹುದಾಗಿದೆ. ಟೆಂಡರುದಾರರು ನಿಗದಿಪಡಿಸಿದ ಠೇವಣಿ ಮೊತ್ತ ಮತ್ತು ಟೆಂಡರುದಾರರು ಫಸಲಿಗೆ ನಮೂದಿಸುವ ಟೆಂಡರ್ ಮೊತ್ತದ ಶೇ.50ರ ಭಾಗದ ಮೊತ್ತವನ್ನು ಪ್ರತ್ಯೇಕವಾಗಿ ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಡಿಮ್ಯಾಂಡ್ ಡ್ರಾಫ್ಟ್ ಮುಖಾಂತರ KSHDA, Bangalore (ಕರ್ನಾಟಕ ರಾಜ್ಯ ತೋಟಗಾರಿಕೆ ಅಭಿವೃದ್ಧಿ ಏಜೆನ್ಸಿ, ಬೆಂಗಳೂರು) ರವರ ಹೆಸರಿನಲ್ಲಿ ಪಡೆದು ಭರ್ತಿ ಮಾಡಿದ ಟೆಂಡರ್ ಫಾರಂಗೆ ಕಡ್ಡಾಯವಾಗಿ ಲಗತ್ತಿಸಬೇಕು. ಟೆಂಡರ್ ಫಾರಂನಲ್ಲಿ ಹೆಸರು, ವಿಳಾಸ, ಟೆಂಡರ್ ಮೊತ್ತ ಡಿಡಿ ಸಂಖ್ಯೆಗಳನ್ನು ಕಡ್ಡಾಯವಾಗಿ ದಾಖಲಿಸಬೇಕು, ಇಲ್ಲದಿದ್ದರೆ ಅಪೂರ್ಣ ಟೆಂಡರ್ ಎಂದು ತಿರಸ್ಕರಿಸಲಾಗುವುದು. ಭರ್ತಿ ಮಾಡಿದ ಟೆಂಡರ್ ಫಾರಂ ಮತ್ತು ಡಿಡಿಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ಸಲ್ಲಿಸುವುದು.

ಟೆಂಡರ್ ಅನುಮೋದನೆಯಾದ ದಿನಾಂಕದಿಂದ 10 ದಿನಗಳೊಳಗೆ ಪೂರ್ತಿ ಹಣವನ್ನು ಡಿಡಿ ರೂಪದಲ್ಲಿ ಪಾವತಿಸಿ ಸಪೋಟ ಫಸಲನ್ನು 30.06.2011 ರವರೆಗೆ ಹಾಗೂ ಮಾವು, ಹಲಸು ಹಾಗೂ ತೆಂಗಿನ ಫಸಲುಗಳನ್ನು 31.12.2011ರ ವರೆಗೆ ರೂಢಿಸಿಕೊಳ್ಳಬಹುದಾಗಿದೆ. ಟೆಂಡರನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರಿಗಿರುತ್ತದೆ. ಇಲಾಖಾ ಅಧಿಕಾರಿಗಳ ತೀರ್ಮಾನವೇ ಅಂತಿಮವಾಗಿರುತ್ತದೆ. ಹೆಚ್ಚಿನ ವಿವರಗಳಿಗೆ ಸಹಾಯಕ ತೋಟಗಾರಿಕೆ ನಿರ್ದೇಶಕರು, ಹುಳಿಮಾವು ತೋಟಗಾರಿಕೆ ಕ್ಷೇತ್ರ, ಬೆಂಗಳೂರು ರವರನ್ನು ಕಛೇರಿ ವೇಳೆಯಲ್ಲಿ ಸಂಪರ್ಕಿಸಿ ಪಡೆಯಬಹುದಾಗಿದೆ.

ಸಹಾಯಕ ತೋಟಗಾರಿಕೆ ನಿರ್ದೇಶಕರು,
ಹುಳಿಮಾವು ತೋಟಗಾರಿಕೆ ಕ್ಷೇತ್ರ.

ಪಿ.ಆರ್.72

**ಸಹಾಯಕ ಕೃಷಿ ನಿರ್ದೇಶಕರವರ ಕಛೇರಿ, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು–64**

**ಸಂಖ್ಯೆ: ಸ.ಕೃ.ನಿ.ಬೆಂ.ಉ.ತಾ.ಲೆಕ್ಕ–2:ಜಡವಸ್ತು:ಹರಾಜು:10–11, ದಿನಾಂಕ:28ನೇ ಜನವರಿ, 2011**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಸಹಾಯಕ ಕೃಷಿ ನಿರ್ದೇಶಕರು, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು–64ರವರ ಕಛೇರಿಯಲ್ಲಿ ಲಭ್ಯವಿರುವ ಈ ಕೆಳಕಂಡ ವಸ್ತುಗಳ ಕ್ರ.ಸಂ.1 ರಿಂದ 13 ರವರೆಗಿನ ಅನುಪಯುಕ್ತ ವಸ್ತುಗಳನ್ನು ಟೆಂಡರ್–ಕಂ–ಬಹಿರಂಗ ಹರಾಜಿನ ಮೂಲಕ ಸ್ಪರ್ಧಾತ್ಮಕ ದರಗಳನ್ನು ಕರೆದು ಬಹಿರಂಗ ಹರಾಜನ್ನು ದಿನಾಂಕ:10.03.2011 ರಂದು 11.00 ಗಂಟೆಗೆ ಈ ಕಛೇರಿ ಆವರಣದಲ್ಲಿ ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

| ಕ್ರ. ಸಂ. | ಅನುಪಯುಕ್ತ ಜಡ ದಾಸ್ತಾನು ವಸ್ತುಗಳ ವಿವರ | ಪರಿಮಾಣ |
|---|---|---|
| 1. | 'S' ಮಾದರಿ ಕುರ್ಚಿಗಳು | 1 |
| 2. | ಮರದ ಕುರ್ಚಿಗಳು | 3 |
| 3. | ಟೈಪರೈಟರ್ ರಿವಾಲ್ವಿಂಗ್ ಚೇರ್ | 1 |
| 4. | ಸ್ಟೀಲ್ ಮಡಿಚುವ ಕುರ್ಚಿಗಳು | 37 |
| 5. | ಸ್ಟೀಲ್ ಟ್ರೇಗಳು | 3 |
| 6. | ಟೇಬಲ್ ಫ್ಯಾನ್ | 3 |
| 7. | ಕಾಲಿಂಗ್ ಬೆಲ್ | 1 |
| 8. | ಫೋಟೋ ಫ್ರೇಂ | 1 |
| 9. | ಮ್ಯೂಸಿಯಂ ಜಾರ್ಸ್ | 16 |
| 10. | ಈಸಾಲ್ ಸ್ಟಾಂಡ್ | 1 |
| 11. | ಸ್ಟೀಲ್ ಆಲ್ಮೇರಾ | 1 |
| 12. | ಫಿಕ್ಸೋಗ್ರಾಫ್ ಬೋರ್ಡ್ | 1 |
| 13. | ಸ್ಟೀಲ್ ಬುಟ್ಟಿಗಳು | 3 |

ಸಹಾಯಕ ಕೃಷಿ ನಿರ್ದೇಶಕರು,
ಬೆಂಗಳೂರು ಉತ್ತರ ತಾಲ್ಲೂಕು.

ಪಿ.ಆರ್.61

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ

## ಸಾರ್ವಜನಿಕ ಟೆಂಡರ್ ಕಂ ಹರಾಜು ಪ್ರಕಟಣೆ

**ಸಂಖ್ಯೆ:323: ಕೆಎ–01/ಜಿ–3862/2011, ದಿನಾಂಕ:18ನೇ ಜನವರಿ, 2011**

**ವಿಷಯ:** ಇಲಾಖಾ ಮೋಟಾರು ವಾಹನ ಸಂಖ್ಯೆ: ಕೆಎ–01/ಜಿ–3862 (ಕಾರ್‌ನ್ನು) ಟೆಂಡರ್ ಕಂ ಹರಾಜಿನಲ್ಲಿ ಮಾರಾಟ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:142:ಶಿವಾನೀ:2000, ಬೆಂಗಳೂರು ದಿನಾಂಕ:05.01.2001.

2) ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆ: ಎಚ್‌ಸಿಬಿ/40/ಕಾರ್/2008, ದಿನಾಂಕ:01.04.2010.

3) ಜಿಲ್ಲಾಧಿಕಾರಿಗಳು, ಕೊಪ್ಪಳ ಪತ್ರ ಸಂಖ್ಯೆ: ಕಂ:ಲೆಕ್ಕ:2010–11:863 ದಿನಾಂಕ:29.06.2010.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಇಲಾಖಾ ಮೋಟಾರು ವಾಹನ ಸಂಖ್ಯೆ: ಕೆಎ–01/ಜಿ–3862 ಪೆಟ್ರೋಲ್ ಚಾಲಿತ ಅಂಬಾಸಿಡರ್ ಕಾರನ್ನು ಈ ಕೆಳಗೆ ತಿಳಿಸಿರುವ ಷರತ್ತಿಗನುಗುಣವಾಗಿ ಪ್ರಸ್ತುತ ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ:21.02.2011 ರಂದು ಮಧ್ಯಾಹ್ನ 12.00 ಗಂಟೆಗೆ ಸಾರ್ವಜನಿಕ ಟೆಂಡರ್ ಕಂ ಹರಾಜಿನಲ್ಲಿ ಮಾರಾಟ ಮಾಡುವ ಕುರಿತು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ವಾಹನದ ವಿವರ ಈ ರೀತಿ ಇರುತ್ತದೆ.

| | | |
|---|---|---|
| 1. | ವಾಹನದ ನೊಂದಣಿ ಸಂಖ್ಯೆ | ಕೆಎ–01/ಜಿ–3862 |
| 2. | ವಾಹನದ ವರ್ಗ | ಅಂಬಾಸಿಡರ್ ಕಾರ್ |
| 3. | ತಯಾರಕರ ಹೆಸರು | ಹಿಂದೂಸ್ತಾನ್ ಮೋಟಾರ್ಸ್ ಲಿಮಿಟೆಡ್ ಸಲೂನ |
| 4. | ತಯಾರಾದ ವರ್ಷ | ಏಪ್ರಿಲ್ 2002 |
| 5. | ಸಿಲೆಂಡರ್ ಸಂಖ್ಯೆ | 4 |
| 6. | ಇಂಧನ | ಪೆಟ್ರೋಲ್ |
| 7. | ಆಸನ ಸಾಮರ್ಥ್ಯ | 5 (ಡ್ರೈವರ್ ಸಹಿತ) |
| 8. | ಚಾಸಿಸ್ ಸಂಖ್ಯೆ | ಎಡಿಬಿ 850729 |
| 9. | ಇಂಜಿನ್ ಸಂಖ್ಯೆ | 3ಇಎಲ್‌ಸಿಬಿ 072228 |
| 10. | ಅಶ್ವಶಕ್ತಿ | 1817 ಸಿ.ಸಿ. |

ಹೆಚ್ಚಿನ ವಿವರಗಳನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ ಇಲ್ಲಿಂದ ಪಡೆಯಬಹುದು.

**ಸಿ.ಎಸ್. ಮಾಳಗಿ**

ಪಿ.ಆರ್.65

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ.

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ

## ಸಾರ್ವಜನಿಕ ಟೆಂಡರ್ ಕಂ ಹರಾಜು ಪ್ರಕಟಣೆ

**ಸಂಖ್ಯೆ:324: ಜಿಎ–01/ಜಿ–4025/2011, ದಿನಾಂಕ:18ನೇ ಜನವರಿ, 2011**

**ವಿಷಯ:** ಇಲಾಖಾ ಮೋಟಾರು ವಾಹನ ಸಂಖ್ಯೆ: ಕೆಎ–01/ಜಿ–4025 (ಮಾರುತಿ ಓಮ್ನಿಯನ್ನು) ಟೆಂಡರ್ ಕಂ ಹರಾಜಿನಲ್ಲಿ ಮಾರಾಟ ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ:142:ಶಿವಾನೀ:2000, ಬೆಂಗಳೂರು ದಿನಾಂಕ:05.01.2001.

2) ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಪತ್ರ ಸಂಖ್ಯೆ: ಎಚ್‌ಸಿಬಿ/222/ಕಾರ್/2002, ದಿನಾಂಕ:01.04.2010.

3) ಜಿಲ್ಲಾಧಿಕಾರಿಗಳು, ಕೊಪ್ಪಳ ಪತ್ರ ಸಂಖ್ಯೆ: ಕಂ:ಲೆಕ್ಕ:2010–11:863 ದಿನಾಂಕ:29.06.2010.

ಈ ಮೂಲಕ ಸಾರ್ವಜನಿಕರಿಗೆ ತಿಳಿಸುವುದೇನೆಂದರೆ ಇಲಾಖಾ ಮೋಟಾರು ವಾಹನ ಸಂಖ್ಯೆ: ಕೆಎ–01/ಜಿ–4025 ಪೆಟ್ರೋಲ್ ಚಾಲಿತ ಮಾರುತಿ ಓಮ್ನಿಯನ್ನು ಈ ಕೆಳಗೆ ತಿಳಿಸಿರುವ ಷರತ್ತಿಗನುಗುಣವಾಗಿ ಪ್ರಸ್ತುತ ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ:21.02.2011 ರಂದು ಮಧ್ಯಾಹ್ನ 12.00 ಗಂಟೆಗೆ ಸಾರ್ವಜನಿಕ ಟೆಂಡರ್ ಕಂ ಹರಾಜಿನಲ್ಲಿ ಮಾರಾಟ ಮಾಡುವ ಕುರಿತು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ವಾಹನದ ವಿವರ ಈ ರೀತಿ ಇರುತ್ತದೆ.

| | | |
|---|---|---|
| 1. | ವಾಹನದ ನೊಂದಣಿ ಸಂಖ್ಯೆ | ಕೆಎ–01/ಜಿ–4025 |
| 2. | ವಾಹನದ ವರ್ಗ | ಮಾರುತಿ ಓಮ್ನಿ |
| 3. | ತಯಾರಕರ ಹೆಸರು | ಮಾರುತಿ ಉದ್ಯೋಗ್ ಲಿಮಿಟೆಡ್ |
| 4. | ತಯಾರಾದ ವರ್ಷ | 2003 |
| 5. | ಸಿಲೆಂಡರ್ ಸಂಖ್ಯೆ | 3 |
| 6. | ಇಂಧನ | ಪೆಟ್ರೋಲ್ |

| | | |
|---|---|---|
| 7. | ಆಸನ ಸಾಮರ್ಥ್ಯ | 5 (ಡ್ರೈವರ್ ಸಹಿತ) |
| 8. | ಚಾಸಿಸ್ ಸಂಖ್ಯೆ | ಎಸ್‌ಟಿ 911 ಎನ್ 571162 |
| 9. | ಇಂಜಿನ್ ಸಂಖ್ಯೆ | ಎಫ್: ಬಿಐಎನ್ 2454842 |
| 10. | ಅಶ್ವಶಕ್ತಿ | 8 |

ಹೆಚ್ಚಿನ ವಿವರಗಳನ್ನು ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಕೊಪ್ಪಳ ಇಲ್ಲಿಂದ ಪಡೆಯಬಹುದು.

**ಸಿ.ಎಸ್. ಮಾಳಗಿ**

ಪಿ.ಆರ್.66

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಕೊಪ್ಪಳ.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಸಂಕ್ಷಿಪ್ತ ಟೆಂಡರು ಪ್ರಕಟಣೆ ಸಂ:67:2010-11/ ದಿನಾಂಕ:18ನೇ ಜನವರಿ, 2011

ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಕಾರ್ಯನಿರ್ವಾಹಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ವಿಭಾಗ, ತುಮಕೂರು, ಇವರ ವತಿಯಿಂದ ಕೆಳಗಿನ ಕಾಮಗಾರಿಗಳ ಬಗ್ಗೆ ದ್ವಿಲಕೋಟೆ ಪದ್ಧತಿಯಲ್ಲಿ ಇ-ಟೆಂಡರಿಂಗ್ ಮೂಲಕ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿ ವಿವರಣೆ | ಅಂದಾಜು ಮೊತ್ತ ರೂ. ಲಕ್ಷಗಳಲ್ಲಿ | ಇಎಂಡಿ ಮೊತ್ತ ರೂ. ಲಕ್ಷಗಳಲ್ಲಿ |
|---|---|---|---|
| **ಲೆಕ್ಕ ಶೀರ್ಷಿಕೆ: 5054 ರಸ್ತೆ ಮತ್ತು ಸೇತುವೆ: ಅಪೆಂಡಿಕ್ಸ್-ಇ** | | | |
| 1. | ತುಮಕೂರು ತಾ: ಹಳೆಯ ರಾಷ್ಟ್ರೀಯ ಹೆದ್ದಾರಿ-4 ರಿಂದ ದಿಬ್ಬೂರು (ಗಾರ್ಡನ್ ರಸ್ತೆ) ಗ್ರಾಮಕ್ಕೆ ಸಂಪರ್ಕಿಸುವ ರಸ್ತೆ ಅಭಿವೃದ್ಧಿ ಕಾಮಗಾರಿ (ರೂ.133-00 ಲಕ್ಷ) | 414.00 Package '3' | 6.21 |
| 2. | ತುಮಕೂರು ತಾ: ಮಧುಗಿರಿ ರಸ್ತೆಯಿಂದ ಹಿಲ್‌ಸ್ಟೇಷನ್ ರಸ್ತೆ ವಡೇರ ಹಳ್ಳಿ ವರೆಗೆ ರಸ್ತೆ ಅಭಿವೃದ್ಧಿ ಕಾಮಗಾರಿ (ರೂ.131-00 ಲಕ್ಷ) | | |
| 3. | ತುಮಕೂರು ತಾ: ರಾ.ಹೆ.206 ರಿಂದ ಟಿ.ಸಿ.ಬಿ. ರಸ್ತೆ ಅಭಿವೃದ್ಧಿ ಕಾಮಗಾರಿ ಹಾಗೂ ಡಾಂಬರೀಕರಣ ಕಾಮಗಾರಿ. (ರೂ.150-00 ಲಕ್ಷ) | | |

ಈ ಬಗ್ಗೆ ಹೆಚ್ಚಿನ ವಿವರಗಳನ್ನು ಕಾರ್ಯಪಾಲಕ ಇಂಜಿನಿಯರ್, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ತುಮಕೂರು ಕರ್ನಾಟಕ ರಾಜ್ಯ ರವರ ಕಛೇರಿ ವೇಳೆಯಲ್ಲಿ ಪಡೆಯಬಹುದಾಗಿದೆ. ಹಾಗೂ ವೆಬ್‌ಸೈಟ್ ಸಂ: www.eproc.karnataka.gov.inರಲ್ಲಿ ಪಡೆಯಬಹುದಾಗಿದೆ. ಉಳಿದ ನಿಬಂಧನೆಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕಾರ್ಯಪಾಲಕ ಇಂಜಿನಿಯರ್,

ಪಿ.ಆರ್.67

ಲೋಬಂ ಮತ್ತು ಒಜಸಾಇ ವಿಭಾಗ,
ತುಮಕೂರು.

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ

## ಅಲ್ಪಾವಧಿ ಟೆಂಡರು ಪ್ರಕಟಣೆ

## ಸಂಖ್ಯೆ: ಕಾಇಂ:ಲೋವಿಚಿ:ಎಇ-1: ಟೆಂಡರ್-15:2010-11, ದಿನಾಂಕ:29ನೇ ಜನವರಿ, 2011

ಕರ್ನಾಟಕ ಸರ್ಕಾರವು, ಸರ್ಕಾರದ ಆದೇಶ ಸಂಖ್ಯೆ: ಲೋಇ111:ಸಿಎನ್‌ಹೆಚ್ 2009:31.08.2010ರ ಅನ್ವಯ ಕಬ್ಬಿಣದ ಅದಿರು ಸಾಗಾಣಿಕೆ ಮಾಡುವ ಯಾವುದೇ ಎಕ್ಸಲ್ ಮಿತಿಯಿಲ್ಲದೆ ಲಾರಿಗಳಿಗೆ ಪ್ರತಿ ಬಾರಿಗೆ ರೂ.500-00 ರಂತೆ ರಸ್ತೆ ಶುಲ್ಕ ಸಂಗ್ರಹಿಸಲು ನಿರ್ಧರಿಸಿದೆ.

ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಚಿತ್ರದುರ್ಗ ಇವರು ಲೋಕೋಪಯೋಗಿ ಇಲಾಖೆಯ ರಸ್ತೆಗಳಲ್ಲಿರುವ ನಿಗದಿಪಡಿಸಲಾದ ಟೋಲ್ ಪ್ಲಾಜಾಗಳಲ್ಲಿ ತಾತ್ಕಾಲಿಕವಾಗಿ ರಸ್ತೆ ಶುಲ್ಕ ಸಂಗ್ರಹಿಸಲು ಆಸಕ್ತ ಬಿಡ್‌ದಾರರಿಗೆ ಟೆಂಡರ್ ಆಹ್ವಾನಿಸಲಾಗಿದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಮುಂಗಡ ಠೇವಣಿ ಹಣ ರೂ.ಗಳಲ್ಲಿ |
|---|---|---|
| 1. | ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಚಿತ್ರದುರ್ಗ ವಿಭಾಗ ವ್ಯಾಪ್ತಿಯಲ್ಲಿ ಅದಿರು ಸಾಗಾಣಿಕೆ ಹಾಗೂ ಇತರೆ ಲಾರಿಗಳಿಂದ ಟೋಲ್ ಸಂಗ್ರಹಣೆ | 400000-00 |

